# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1978
ಸದಸ್ಯರ ಹೆಸರು : ಶ್ರೀ ಸಿ.ಎಂ.ಇಬ್ರಾಹಿಂ
(ವಿಧಾನಸಭೆಯಿಂದ ಚುನಾಯಿತರಾದವರು)
ಉತ್ತರಿಸುವ ದಿನಾಂಕ : 16.03.2022.
ಉತ್ತರಿಸುವ ಸಚಿವರು : ಕಂದಾಯ ಸಚಿವರು

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೆಂಗಳೂರು ನಗರದಲ್ಲಿ ಅನಧಿಕೃತ ಭೂ ನಿರ್ಮಾಣವನ್ನು ಸಕ್ರಮಗೊಳಿಸುವಿಕೆಗೆ ಇರುವ ಮಾನದಂಡಗಳೇನು; ಬೆಂಗಳೂರು ಉತ್ತರ ಮತ್ತು ದಕ್ಷಿಣ ತಾಲ್ಲೂಕುಗಳಲ್ಲಿ ಅನಧಿಕೃತ ಭೂ ನಿರ್ಮಾಣವನ್ನು ಸಕ್ರಮಗೊಳಿಸುವಿಕೆಗಾಗಿ 2017ರಿಂದ ಸಲ್ಲಿಕೆಯಾಗಿರುವ ಅರ್ಜಿಗಳೆಷ್ಟು;<br>(ವಾರ್ಡ್/ಗ್ರಾಮವಾರು ಮತ್ತು ಸರ್ವೆ.ನಂ/ಆಸ್ತಿ ಸಂಖ್ಯೆಗಳ ಸಂಪೂರ್ಣ ಮಾಹಿತಿ)</td><td>ಅಕ್ರಮ ಅನಧಿಕೃತ ಭೂ ನಿರ್ಮಾಣವನ್ನು ಸಕ್ರಮಗೊಳಿಸುವ ಯಾವುದೇ ಪ್ರಸ್ತಾವನೆ ಸರ್ಕಾರದ ಮುಂದಿರುವುದಿಲ್ಲ.<br><br>ಬೆಂಗಳೂರು ಉತ್ತರ/ದಕ್ಷಿಣ ತಾಲ್ಲೂಕು ವ್ಯಾಪ್ತಿಯಲ್ಲಿ ಅನಧಿಕೃತವಾಗಿ ಭೂ ನಿರ್ಮಾಣವಾಗಿರುವ ಮಾಹಿತಿ ಹಾಗೂ ವಿವರಗಳನ್ನು ಈ ಕೆಳಕಂಡ ಕೋಷ್ಟಕದಲ್ಲಿ ವಿವರಿಸಲಾಗಿರುತ್ತದೆ.<br><br>
<table>
<tr><th>ಕ್ರ. ಸಂ</th><th>ತಾಲ್ಲೂಕು</th><th>ಅನಧಿಕೃತ ಬಡಾವಣೆಗಳ ಸಂಖ್ಯೆ</th><th>ನೋಟೀಸ್ ಜಾರಿ ಮಾಡಿರುವ ಪ್ರಕರಣಗಳು</th><th>ಎಫ್.ಐ.ಆರ್. ದಾಖಲಿಸಿರುವ ಪ್ರಕರಣಗಳು</th></tr>
<tr><td>1</td><td>ಬೆಂಗಳೂರು ಉತ್ತರ</td><td>335</td><td>310</td><td>31</td></tr>
<tr><td>2</td><td>ಬೆಂಗಳೂರು ದಕ್ಷಿಣ</td><td>778</td><td>352</td><td>108</td></tr>
<tr><td></td><td>ಒಟ್ಟು</td><td>1113</td><td>662</td><td>139</td></tr>
</table></td></tr>
<tr><td>ಆ)</td><td>ಬೆಂಗಳೂರು ಉತ್ತರ ಮತ್ತು ದಕ್ಷಿಣ ತಾಲ್ಲೂಕುಗಳಲ್ಲಿ ಇದುವರೆಗೂ ಸಕ್ರಮಗೊಂಡಿರುವ ಪ್ರಕರಣಗಳೆಷ್ಟು; (ವಾರ್ಡ್ ವಾರು ಮಾಹಿತಿ ನೀಡುವುದು) ಸಕ್ರಮಗೊಳ್ಳದೇ ಇರುವ ಪ್ರಕರಣಗಳಿಗೆ ಕಾರಣವೇನು ಹಾಗೂ ಯಾವ ಕಾಲಮಿತಿಯೊಳಗೆ ಸಕ್ರಮಗೊಳಿಸಲಾಗುವುದು; ಹೊಸಕೆರೆಹಳ್ಳಿ ಪಟ್ಟಣ 158 ವಾರ್ಡ್ ಗ್ರಾಮದ ವ್ಯಾಪ್ತಿಯಲ್ಲಿ ಸಲ್ಲಿಕೆಯಾಗಿರುವ ಅರ್ಜಿಗಳ ಸಕ್ರಮಗೊಳಿಸುವ ಕಾರ್ಯ ಯಾವಾಗ ಕೈಗೊಳ್ಳಲಾಗುವುದು;</td><td>ಬೆಂಗಳೂರು ಉತ್ತರ/ದಕ್ಷಿಣ ತಾಲ್ಲೂಕು ವ್ಯಾಪ್ತಿಯಲ್ಲಿ ಸಕ್ರಮಗೊಂಡಿರುವ ಪ್ರಕರಣಗಳು ಇರುವುದಿಲ್ಲ.</td></tr>
<tr><td>ಇ)</td><td>ಸಂಧ್ಯಾ ಸುರಕ್ಷಾ ಯೋಜನೆಯಡಿ ಬಳ್ಳಾರಿ ಜಿಲ್ಲೆಯ ಕಂಪ್ಲಿ ತಾಲ್ಲೂಕಿನ ಕಂಪ್ಲಿ ಹೋಬಳಿ/ಗ್ರಾಮಗಳಲ್ಲಿ ಎಷ್ಟು ಅರ್ಜಿಗಳು ಸಲ್ಲಿಕೆಯಾಗಿದೆ; ಎಷ್ಟು</td><td>ಸಂಧ್ಯಾ ಸುರಕ್ಷಾ ಯೋಜನೆಯಡಿ ಬಳ್ಳಾರಿ ಜಿಲ್ಲೆಯ ಕಂಪ್ಲಿ ತಾಲ್ಲೂಕಿನ ಕಂಪ್ಲಿ ಹೋಬಳಿಯ ಗ್ರಾಮಗಳಲ್ಲಿ ಒಟ್ಟು 1921 ಅರ್ಜಿಗಳು ಸ್ವೀಕೃತವಾಗಿದ್ದು, ಈ ಪೈಕಿ 1200 ಫಲಾನುಭವಿಗಳಿಗೆ ಮಂಜೂರು ಮಾಡಲಾಗಿದೆ. (ಗ್ರಾಮವಾರು ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ)</td></tr>
</table>

| | | |
|---|---|---|
| | ಫಲಾನುಭವಿಗಳಿಗೆ ಮಂಜೂರು ಮಾಡಲಾಗಿದೆ; (ಗ್ರಾಮ, ಹೆಸರು ಮಂಜೂರಾದ ದಿನಾಂಕವಾರು ವಿವರ ಒದಗಿಸುವುದು) | |
| ಈ) | ಕಂಪ್ಲಿ ಹೋಬಳಿಯ ಮೆಟ್ರಿ ಗ್ರಾಮದ ಅರ್ಜಿದಾರರು ಈ ಯೋಜನೆಯ ಫಲಾನುಭವಿಯಾಗಲು ಸೂಕ್ತ ದಾಖಲಾತಿಗಳೊಡನೆ ಅರ್ಜಿ ಸಲ್ಲಿಸಿದ್ದರೂ ವಿಳಂಬ ನೀತಿ ಅನುಸರಿಸಲು ಕಾರಣವೇನು; ಯಾವ ಕಾಲಮಿತಿಯೊಳಗೆ ಮಂಜೂರು ಮಾಡಲಾಗುವುದು? (ವಿವರ ನೀಡುವುದು) | ಪಿಂಚಣಿ ಯೋಜನೆಗಳನ್ನು ಸಕಾಲ ಸೇವೆಯಡಿ ತರಲಾಗಿದ್ದು, ಅರ್ಜಿ ಸ್ವೀಕರಿಸಿದ 45 ದಿನಗಳ ಒಳಗೆ ಅರ್ಹರಿಗೆ ಪಿಂಚಣಿ ಮಂಜೂರಾತಿ ನೀಡುವಲ್ಲಿ ಕ್ರಮವಹಿಸಲಾಗುತ್ತಿದೆ. ಕಂಪ್ಲಿ ತಾಲ್ಲೂಕಿನಲ್ಲಿ ವಿಳಂಬವಾಗಿರುವ ಯಾವುದೇ ಪ್ರಕರಣಗಳು ಇರುವುದಿಲ್ಲ. |

ಸಂಖ್ಯೆ: ಆರ್‌ಡಿ 108 ಎಲ್‌ಜಿಕ್ಯೂ 2022

(ಆರ್.ಅಶೋಕ)
ಕಂದಾಯ ಸಚಿವರು

## ಪ್ರಶ್ನೆ ಸಂಖ್ಯೆ 1978ಕ್ಕೆ ಅನುಬಂಧ

| ಕ್ರ. ಸಂ | ಗ್ರಾಮದ ಹೆಸರು | ಮಂಜೂರಾದ ಅರ್ಜಿಗಳ ಸಂಖ್ಯೆ |
|---|---|---|
| 1 | ಅರಳಿಹಳ್ಳಿ | 23 |
| 2 | ಬೆಳಗೋಡುಹಾಳ | 14 |
| 3 | ಚಿಕ್ಕಜಾಯಿಗನೂರು | 30 |
| 4 | ದೇವಲಾಪುರ | 64 |
| 5 | ದೇವಸಮುದ್ರ | 91 |
| 6 | ಎಮ್ಮಿಗನೂರು | 141 |
| 7 | ಹಂಪಾದೇವನಹಳ್ಳಿ | 18 |
| 8 | ಹಿರೇಹಾಯಿಗನೂರು | 2 |
| 9 | ಹೊನ್ನಳ್ಳಿ | 19 |
| 10 | ಇಟಗಿ | 11 |
| 11 | ಜೀರಿಗನೂರು | 14 |
| 12 | ಜವೂಕು | 36 |
| 13 | ಕಂಪ್ಲಿ | 297 |
| 14 | ಕಣಿವಿ ತಿಮ್ಮಲಾಪೂರ | 31 |
| 15 | ಮಾವಿನಹಳ್ಳಿ | 11 |
| 16 | ಮೆಟ್ರಿ | 49 |
| 17 | ಮುದ್ದಾಪುರ-1 | 39 |
| 18 | ಮುದ್ದಾಪುರ-2 | 29 |
| 19 | ನೆಲ್ಲುಡಿ | 71 |
| 20 | ರಾಮಸಾಗರ | 94 |
| 21 | ಸಣಾಪುರ | 37 |
| 22 | ಸಂಕಲಾಪುರ | 1 |
| 23 | ಸೋಮಲಾಪುರ | 16 |
| 24 | ಸುಗ್ಗೇನಹಳ್ಳಿ | 34 |
| 25 | ಉಪ್ಪಾರಹಳ್ಳಿ | 30 |
| | ಒಟ್ಟು | 1202 |